ಭಾಷೆಯ ಲಿಪಿ ಕಲಿಯುವಿಕೆ

**Learning the Script**

ಖುಷಿ ಸರ್ಕಾರಿ ಶಾಲೆಯಲ್ಲಿ ೨ನೇ ತರಗತಿ ಓದುತ್ತಿರುವ ಹುಡುಗಿ. ನಮ್ಮ ಗ್ರಂಥಾಲಯ ತರಗತಿಯ ಅವಧಿಯಲ್ಲಿ, ಅವಳಿಗೆ ಇಷ್ಟವಾಗುವ ಒಂದು ಪುಸ್ತಕವನ್ನು ಓದಲು ಪ್ರಯತ್ನಿಸುವಂತೆ ನಾನು ಅವಳನ್ನು ಕೇಳಿದೆ. ಈ ಪ್ರತಿಭಾವಂತ ಉತ್ಸಾಹಿ ಮಗು ಮೊದಲ ಎರಡು ಪದಗಳನ್ನು ಓದಲು ಪ್ರಯತ್ನಿಸಿದ್ದು ಹೀಗೆ '**एक दिन**': (ಏಕ್ ದಿನ್)

**"ए...से एडी क...कबतू र एक द..."** (ಏ – ಏಡಿ ಕ – ಕಬೂತ..ರ್ ದ..)

(ಅವಳು '**द**' (ದ) ಅಕ್ಷರವನ್ನು ಓದುವ ಹೊತ್ತಿಗೆ ಈ ರೀತಿಯಾಗಿ ಇಡೀ ವರ್ಣಮಾಲೆಯನ್ನೇ ಒಂದೊಂದಾಗಿ ಓದುತ್ತಾ ಬಹಳ ಸಮಯ ತೆಗೆದುಕೊಳ್ಳುತ್ತಿದ್ದಳು)

**"द दवा न..न नल "** (ದ – ದವಾ ನ..ನ.. ನಳ) (ಅವಳು ಪದವನ್ನು ಕೂಡಿಸಿ ಓದಲು ಪ್ರಯತ್ನಿಸಲೇ ಇಲ್ಲ)

ಖುಷಿಯ ಈ ಓದುವ ಪ್ರಯತ್ನಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು? ಈ ರೀತಿ ಓದಲು ಪ್ರಯತ್ನಿಸುತ್ತಿರುವ ಮಗು ಖುಷಿ ಒಬ್ಬಳೇ ಅಲ್ಲ; ಬದಲಾಗಿ ಇನ್ನೂ ಇಂತಹ ಹಲವಾರು ಮಕ್ಕಳನ್ನು ನೀವು ನೋಡಿರುತ್ತೀರಿ.

ಭಾರತೀಯ ಶಾಲೆಗಳಲ್ಲಿ, ಸಾಮಾನ್ಯವಾಗಿ ಒಂದು ಅಕ್ಷರವನ್ನು ಆ ಅಕ್ಷರದೊಂದಿಗೆ ಆರಂಭವಾಗುವ ಒಂದು ಪದದೊಂದಿಗೆ ಸಂಯೋಜಿಸುವ ಮೂಲಕ ವರ್ಣಮಾಲೆಯನ್ನು ಕಲಿಸಲಾಗುತ್ತದೆ. ಶಿಕ್ಷಕರು ವಿದ್ಯಾರ್ಥಿಗಳಿಗೆ ಪದೇ ಪದೇ ಅಕ್ಷರಗಳನ್ನು ತಿದ್ದಲು ಮತ್ತು ಕಾಪಿ ಬರವಣಿಗೆ ಮಾಡಲು ಹೇಳುತ್ತಾರೆ ಅಥವಾ ವರ್ಣಮಾಲೆಯನ್ನು ಪಠಿಸುವಂತೆ ಹೇಳುತ್ತಾರೆ. ಆರಂಭಿಕ ವರ್ಷಗಳಲ್ಲಿ ನಾವು ಈ ರೀತಿಯ ಗಿಳಿಪಾಠ ಮಾಡಿಸುತ್ತಲೇ ಸಮಯವನ್ನು ವ್ಯಯಿಸುತ್ತೇವೆ. ಆದರೆ ಇವು ಪರಿಣಾಮಕಾರಿ ಎಂದು ನಿಮಗೆ ಅನಿಸುತ್ತದೆಯೇ? ಈ ಮಕ್ಕಳು ಓದಲು ಕಲಿಯುತ್ತಿದ್ದಾರೆಯೇ ಅಥವಾ ಅವರು ಏನು ಓದುತ್ತಿದ್ದಾರೆಯೋ ಅದನ್ನು ಅವರು ಅರ್ಥಮಾಡಿಕೊಳ್ಳುತ್ತಿದ್ದಾರೆಯೇ? ಆದರೆ, ಇಲ್ಲಿ ಖುಷಿ ಖಂಡಿತವಾಗಿಯೂ ಅರ್ಥಮಾಡಿಕೊಳ್ಳಲಿಲ್ಲ.

ವಾಸ್ತವವಾಗಿ, ಈ ರೀತಿಯ ತರಗತಿಗಳನ್ನು ಅಧ್ಯಯನ ಮಾಡಿದಾಗ, ೩ನೇ ತರಗತಿಯ ವಿದ್ಯಾರ್ಥಿಗಳಲ್ಲಿ ಕೇವಲ ೨೦% ಕ್ಕಿಂತ (ಅಥವಾ ಐದನೇ ಒಂದು ಭಾಗ) ಕಡಿಮೆ ವಿದ್ಯಾರ್ಥಿಗಳು ಮಾತ್ರ ತಮ್ಮದೇ ತರಗತಿಯ ಪಠ್ಯದಿಂದ ಆಯ್ದ ಪದಗಳ ಪಟ್ಟಿಯನ್ನು ಓದ ಬಲ್ಲವರಾಗಿದ್ದರು (ಸುಬ್ರಮಣಿಯಮ್ ಮತ್ತು ಇತರರು, ೨೦೦೭)!

ಇಂಗ್ಲಿಷ್ ಭಾಷೆಯನ್ನು ಓದಲು ಕಲಿಯುವುದಕ್ಕಿಂತ ಭಾರತೀಯ ಲಿಪಿಗಳನ್ನು ಓದಲು ಕಲಿಯುವುದು ಸುಲಭ ಎಂದು ಹಲವರು ನಂಬುತ್ತಾರೆ. ಏಕೆಂದರೆ ಭಾರತೀಯ ಲಿಪಿಯಲ್ಲಿ ನಾವು ಉಚ್ಚರಿಸುವಂತೆಯೇ ಚಿಹ್ನೆಗಳನ್ನು ಬರೆಯುತ್ತೇವೆ. ಅಂದರೆ, ಚಿಹ್ನೆಗಳು ಮತ್ತು ಶಬ್ದಗಳ ನಡುವೆ ಬಹಳ ನಿಕಟ ಹೊಂದಾಣಿಕೆ ಇದೆ. ಆದರೆ ಇದನ್ನು ಗಮನಿಸಿ–ಇಂಗ್ಲಿಷಿನಲ್ಲಿ ಕೇವಲ ೨೬ ಅಕ್ಷರಗಳಿವೆ, ಮತ್ತು ನಾವು ದೊಡ್ಡಕ್ಷರ ಮತ್ತು ಸಣ್ಣಕ್ಷರಗಳನ್ನು ಪ್ರತ್ಯೇಕವಾಗಿ ಎಣಿಸಿದರೆ (ಹಾಗೆಯೇ ಮಾಡಬೇಕು), ಅದು ಭಾಷೆಯ ಎಲ್ಲಾ ಶಬ್ದಗಳನ್ನು ಉಚ್ಚರಿಸಲು ಕೇವಲ ೫೨ ವಿಭಿನ್ನ ಚಿಹ್ನೆಗಳನ್ನು ಹೊಂದಿರುತ್ತದೆ. ಹಾಗಾದರೆ, ಹೆಚ್ಚಿನ ಭಾರತೀಯ ಲಿಪಿಗಳು ಎಷ್ಟು ಚಿಹ್ನೆಗಳನ್ನು ಹೊಂದಿರುತ್ತವೆ? ಮರಾಠಿ ಭಾಷೆಯನ್ನೇ ತೆಗೆದುಕೊಳ್ಳೋಣ. ಅದರ ವರ್ಣಮಾಲೆಯಲ್ಲಿ ೪೯ ಅಕ್ಷರಗಳು, ೧೨ ರಿಂದ ೧೪ ಸ್ವರಗಳು ಮತ್ತು ಇನ್ನೂ ಅನೇಕ ಒತ್ತಕ್ಷರಗಳು ಇವೆ. ನೀವು ಪ್ರತಿಯೊಂದು ಅಕ್ಷರದೊಂದಿಗೆ ಪ್ರತಿ ಸ್ವರವನ್ನು ಸಂಯೋಜಿಸಿದರೆ (ಕಾಗುಣಿತ), ಇದು ಚಿಕ್ಕ ಮಕ್ಕಳಿಗೆ ಕರಗತಮಾಡಿಕೊಳ್ಳಲು ದೊಡ್ಡ ಸಂಖ್ಯೆಯ ಚಿಹ್ನೆಗಳನ್ನೇ ನೀಡುತ್ತದೆ!

ಇದಲ್ಲದೇ, ನಾವು ಲಿಪಿಯನ್ನು ಬರೆಯುವ ವಿಧಾನವು ನೋಡಲು ಸಂಕೀರ್ಣವಾಗಿದೆ. ನಾವು ವ್ಯಂಜನಕ್ಕೆ ಸ್ವರಗಳನ್ನು ಜೋಡಿಸುವ ವಿಧಾನಗಳ ಬಗ್ಗೆ ಒಮ್ಮೆ ಯೋಚಿಸಿ– ಅದನ್ನು ಅಕ್ಷರದ ಬಲ ಅಥವಾ ಎಡ ಭಾಗಕ್ಕೆ ಅಥವಾ ಅದರ ಮೇಲೆ ಅಥವಾ ಕೆಳಗೆ ಜೋಡಿಸಬಹುದು. ವಯಸ್ಕರಾಗಿ ನಾವು ಇದನ್ನು ನೋಡಿದಾಗ, ಈ ವೈಶಿಷ್ಟ್ಯಗಳನ್ನು ಕಲಿಯುವುದು ನಿಜಕ್ಕೂ ಒಂದು ಅದ್ಭುತ ಸಾಧನೆ ಹಾಗೂ ಲಿಪಿಯನ್ನು ಕಲಿಯಲು ಮತ್ತು ಅಭ್ಯಾಸ ಮಾಡಲು ಪ್ರಾಥಮಿಕ ಶಾಲೆಯಾದ್ಯಂತ ಮಕ್ಕಳಿಗೆ ಸಾಕಷ್ಟು ಸಮಯ ಮತ್ತು ಅವಕಾಶಗಳು ಬೇಕಾಗುತ್ತವೆ ಎಂದು ನಮಗೆ ಅರ್ಥವಾಗದೇ ಇರಬಹುದು.

ಹಾಗಾದರೆ ಈ ವಿಷಯದಲ್ಲಿ ಶಿಕ್ಷಕರು ಏನು ಮಾಡಬೇಕು? ಲಿಪಿಯನ್ನು ಕಲಿಯಲು ನಮ್ಮ ವಿದ್ಯಾರ್ಥಿಗಳಿಗೆ ನಾವು ಬೇರೆ ಯಾವ ರೀತಿಯಲ್ಲಿ ಸಹಾಯ ಮಾಡಬೇಕು? ಈ ಲೇಖನದಲ್ಲಿ, ನಾವು ಇಂತಹ ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸುತ್ತೇವೆ. ಲಿಪಿಯನ್ನು ಕಲಿಯಲು ನೀವು ವಿದ್ಯಾರ್ಥಿಗಳಿಗೆ ಸಹಾಯ ಮಾಡುವಾಗ ನೆನಪಿನಲ್ಲಿಟ್ಟುಕೊಳ್ಳಬೇಕಾದ ಕೆಲವು ಪ್ರಮುಖ ತತ್ವಗಳನ್ನು ವಿಶ್ಲೇಷಿಸುವ ಮೂಲಕ ನಾವು ಪ್ರಾರಂಭಿಸುತ್ತೇವೆ. ನಂತರ, ಈ ತತ್ವಗಳನ್ನು ಅನ್ವಯಿಸಲು ನಿಮ್ಮ ತರಗತಿಯಲ್ಲಿ ನೀವು ಬಳಸಬಹುದಾದ ನಿರ್ದಿಷ್ಟ ಚಟುವಟಿಕೆಗಳು ಮತ್ತು ಆಟಗಳನ್ನು ನಾವು ವಿವರಿಸುತ್ತೇವೆ.

ಲಿಪಿಯನ್ನು ಕಲಿಸಲು ಅವಶ್ಯಕವಾದ ಪ್ರಮುಖ ತತ್ವಗಳು

ಶಬ್ದ-ಚಿಹ್ನೆ ಸಂಬಂಧಗಳ ಸ್ಪಷ್ಟ ಮತ್ತು ವ್ಯವಸ್ಥಿತವಾದ ತಿಳಿವಳಿಕೆಯನ್ನು ಬೆಳೆಸಿ

ನಾವು ಮೊದಲೇ ಹೇಳಿದಂತೆ, ಶಿಕ್ಷಕರು ಸಾಮಾನ್ಯವಾಗಿ ಅಕ್ಷರಗಳನ್ನು (ಲಿಪಿಯ ಚಿಹ್ನೆಗಳು) ಅಥವಾ ಉದಾಹರಣೆಯಲ್ಲಿ (ಕ-ಕಬೂತರ್) ವಿವರಿಸಿದ ರೀತಿಯಲ್ಲಿ ಚಿಹ್ನೆಗಳ ಶಬ್ದಗಳನ್ನು ಕಲಿಸುವುದರ ಮೇಲೆ ಕೇಂದ್ರೀಕರಿಸುತ್ತಾರೆ. ಆದರೆ ಮಕ್ಕಳು ಒಟ್ಟಿಗೇ ಚಿಹ್ನೆಗಳು ಮತ್ತು ಅವುಗಳ ಶಬ್ದಗಳ ಮೇಲೆ ಕೇಂದ್ರೀಕರಿಸಬೇಕಾಗುತ್ತದೆ. ಇದಕ್ಕಾಗಿ ನಾವು ಏಕಕಾಲದಲ್ಲಿ ಶಬ್ದ ಮತ್ತು ಚಿಹ್ನೆಯ ಜ್ಞಾನದೆಡೆಗೆ ಸೆಳೆಯುವ ಚಟುವಟಿಕೆಗಳನ್ನು ಬಳಸಬೇಕಾಗುತ್ತದೆ.

ಭಾರತೀಯ ಲಿಪಿಗಳು ಹೆಚ್ಚಿನ ಸಂಖ್ಯೆಯ ಲಿಖಿತ ಚಿಹ್ನೆಗಳನ್ನು ಹೊಂದಿವೆ. ಆದರೆ ಅವೆಲ್ಲವನ್ನೂ ಒಂದೇ ಸಮಯದಲ್ಲಿ ಕಲಿಸುವ ಅಗತ್ಯವಿಲ್ಲ. ಮೊದಲಿನಿಂದಲೂ ವಿದ್ಯಾರ್ಥಿಗಳಿಗೆ ತಿಳಿದಿರುವ ಪದಗಳನ್ನು ಓದಲು ಮತ್ತು ಬರೆಯಲು ಹಾಗೂ ಅರ್ಥಪೂರ್ಣವಾದ ಪದಗಳನ್ನು ಓದಲು ಮತ್ತು ಬರೆಯಲು ಅವಕಾಶವನ್ನು ನೀಡುವ ಅಕ್ಷರಗಳು (ವರ್ಣ ಉಚ್ಚಾರಾಂಶಗಳು (ಆಲ್ಫಾಸಿಲ್ಲಬೆಲ್) ಮತ್ತು ಗುಣಿತಾಕ್ಷರಗಳ (ದ್ವಿತೀಯ ಸ್ವರ ಚಿಹ್ನೆಗಳು), ಎಚ್ಚರದಿಂದ ಆಯ್ಕೆಮಾಡಿದ ಅಕ್ಷರಗಳ ಗುಂಪುಗಳಿಗೆ ವಿದ್ಯಾರ್ಥಿಗಳನ್ನು ಪರಿಚಯಿಸುವ ಮೂಲಕ ನೀವು ಪ್ರಾರಂಭಿಸಬಹುದು. ಚಿತ್ರ ೧ ಆರಂಭಿಕ ಸಾಕ್ಷರತೆ ಪ್ರಚಾರ ಸಂಘಟನೆಯು (ಓಇಎಲ್‌ಪಿ- ಆರ್ಗಓಇಎಲ್‌ಪಿನೈಝೇಷನ್ ಫಾರ್ ಅರ್ಲಿ ಲಿಟರಸಿ ಪ್ರೊಮೋಶನ್, ಅಜ್ಮೀರ್) ತನ್ನ ಸಾಕ್ಷರತಾ ಕಾರ್ಯಕ್ರಮದಲ್ಲಿ ಬಳಸಿದ ಅಂತಹ ಒಂದು ವರ್ಗೀಕರಣವನ್ನು (ವರ್ಣ ಸಮೂಹ) ತೋರಿಸುತ್ತದೆ (ಜಯರಾಮ್, ೨೦೧೮).

ಓಇಎಲ್‌ಪಿಓಇಎಲ್‌ಪಿಯು ಅಕ್ಷರಗಳೊಂದಿಗೆ ಗುಣಿತಗಳನ್ನೂ ಒಂದೇ ಘಟಕವಾಗಿ ಕಲಿಸುತ್ತದೆ (‘**की**’ ಬದಲು **क** + **ई**) (ಕಿ ಬದಲು ಕ + ಇ). ಮಕ್ಕಳು ಕಾಗುಣಿತಾಕ್ಷರಗಳನ್ನು ಕಲಿಯುವುದನ್ನು ಮತ್ತು ಆರಂಭದಿಂದಲೂ ಅರ್ಥಪೂರ್ಣ ಪದಗಳನ್ನು ರೂಪಿಸಲು ಇದು ಸುಲಭವಾಗಿಸುತ್ತದೆ. ಸಾಂಪ್ರದಾಯಿಕ ಬೋಧನಾ ವಿಧಾನಗಳಲ್ಲಿ, ವಿದ್ಯಾರ್ಥಿಗಳಿಗೆ ಕಾಗುಣಿತಗಳನ್ನು ಪರಿಚಯಿಸುವ ಮೊದಲೇ ಇಡೀ ವರ್ಣಮಾಲೆಯನ್ನು ಪರಿಚಯಿಸಲಾಗುತ್ತದೆ. ಪರಿಣಾಮವಾಗಿ, ಅನೇಕ ತಿಂಗಳುಗಳವರೆಗೆ, ಅವರು ಯಾವುದೇ ಕಾಗುಣಿತಗಳಿಲ್ಲದೇ ಪದಗಳನ್ನು ರಚಿಸುತ್ತಾರೆ. ನಾವು ಮೌಖಿಕ ಭಾಷೆಯಲ್ಲಿ ಬಳಸುವ ಹೆಚ್ಚಿನ ಪದಗಳನ್ನು ಬರೆಯುವಾಗ ಕಾಗುಣಿತಗಳನ್ನು ಬಳಸಬೇಕಾಗುತ್ತದೆ. ಉದಾಹರಣೆಗೆ, **“माँ”** (ಮಾ) ಎಂಬ ಪದದಲ್ಲಿ ‘ಆ’ ಸ್ವರ ಇದೆ, **“रोटी”** (ರೋಟಿ) ಎಂಬ ಪದದಲ್ಲಿ ಎರಡು ಸ್ವರಗಳಿವೆ. ನಾವು ಸ್ವರಗಳನ್ನು ಪದಗಳಿಂದ ತೆಗೆದುಹಾಕಿದಾಗ, ಮಕ್ಕಳು ತಮ್ಮ ದೈನಂದಿನ ಮಾತಿನಲ್ಲಿ ಬಳಸಬಹುದಾದ ಅಥವಾ ಬಳಸದ ಪದಗಳನ್ನು ರಚಿಸುತ್ತಿರುತ್ತಾರೆ. **“जल”** (ಜಲ) ಮತ್ತು **“गज”** (ಗಜ) ಅಂತಹ ಪದಗಳನ್ನು ಹಿಂದಿ ಮಾತನಾಡುವ ಹೆಚ್ಚಿನ ಚಿಕ್ಕ ಮಕ್ಕಳು ಬಳಸುವುದು ತೀರಾ ಕಡಿಮೆ. ಆದ್ದರಿಂದ ಓಇಎಲ್‌ಪಿ ಯಂತಹ ಸಂಸ್ಥೆಗಳು ಮೊದಲಿನಿಂದಲೇ ವಿದ್ಯಾರ್ಥಿಗಳಿಗೆ ಕಾಗುಣಿತಗಳನ್ನು ಪರಿಚಯಿಸುತ್ತವೆ, ಮತ್ತು ವಿದ್ಯಾರ್ಥಿಗಳು ತಮ್ಮ ದೈನಂದಿನ ಜೀವನದಲ್ಲಿ ಬಳಸುವ ಪದಗಳನ್ನು ರಚಿಸಲು ಸಹಾಯ ಮಾಡುತ್ತವೆ.

ಮೊದಲ ಕೆಲವು ವರ್ಗೀಕರಣಗಳನ್ನು ಗ್ರಹಿಸಲು ಮಕ್ಕಳು ಸ್ವಲ್ಪ ಸಮಯ ತೆಗೆದುಕೊಳ್ಳಬಹುದು. ಆದರೆ ಒಮ್ಮೆ ಅದರ ಹಿಂದಿನ ತರ್ಕವನ್ನು ಅವರು ಅರ್ಥಮಾಡಿಕೊಂಡರೆ, ಉಳಿದ ವರ್ಗೀಕರಣಗಳನ್ನು ಬೇಗನೆ ಅರ್ಥಮಾಡಿಕೊಳ್ಳುತ್ತಾರೆ.

ವರ್ಣಸಮೂಹ ೧. ವ್ಯಂಜನಗಳು ಮತ್ತು ಸ್ವರಗಳು. ಅಕ್ಷರ ಫಲಕ. ಪದ-ಗೋಡೆ. ವಿಷಯಾಧರಿತ ಪದಗಳು. ಪ್ರಾಸಬದ್ಧ ಪದಗಳು. ಚಿತ್ರ ೧ ಅಜ್ಮೀರ್‌ನ ಓಇಎಲ್‌ಪಿ ಯಲ್ಲಿ ಬಳಸಲಾದ ಮೊದಲ ಅಕ್ಷರ-ಮಾತ್ರಾ ವರ್ಗೀಕರಣ (ಅಥವಾ ವರ್ಣಸಮೂಹ).

ವಿದ್ಯಾರ್ಥಿಗಳನ್ನು ಪದ ರಚಿಸಲು ಮತ್ತು ಪದ ಬಿಡಿಸಲು ಪ್ರೋತ್ಸಾಹಿಸಿ

ಲಿಪಿಯನ್ನು ಕರಗತಮಾಡಿಕೊಳ್ಳುವ ಮೊದಲು ಅದನ್ನು ಬಳಸಲು ಸಾಕಷ್ಟು ಅಭ್ಯಾಸ ಮಾಡುವ ಅಗತ್ಯ ಮಕ್ಕಳಿಗಿದೆ. ನಾವು ‘ಅಭ್ಯಾಸ’ ಎಂದು ಹೇಳಿದ್ದರ ಅರ್ಥ, ಕಪ್ಪುಹಲಗೆಯ ಮೇಲೆ ಬರೆದಿರುವ ಪದಗಳನ್ನು ಪದೇ ಪದೇ ಕಾಪಿ ಮಾಡಬೇಕು ಎಂದಲ್ಲ. ಕೇವಲ ಈ ಅನುಭವದಿಂದ, ಪರಿಚಯವಿಲ್ಲದ ಪದಗಳನ್ನು ಹೇಗೆ ಓದುವುದು ಮತ್ತು ಬರೆಯುವುದು ಎಂದು ಅವರು ಕಲಿಯಲು ಸಾಧ್ಯವಾಗದೇ ಇರಬಹುದು. ಪದಗಳನ್ನು ಹೇಗೆ ರಚಿಸುವುದು ಮತ್ತು ಬಿಡಿಸುವುದು ಎಂಬುದನ್ನು ಕಲಿಯಲು ಸಹಾಯ ಮಾಡುವುದು ಮಕ್ಕಳಿಗೆ ಉತ್ತಮವಾದ ಫಲಿತಾಂಶ ಕೊಡಬಹುದು. ಪದಗಳನ್ನು ರಚಿಸುವುದು ಮತ್ತು ಬಿಡಿಸುವುದರಿಂದ ಮಕ್ಕಳಿಗೆ ಅವರು ಏನು ಮಾಡುತ್ತಿದ್ದಾರೆ, ಪದಗಳು ಹೇಗೆ ರೂಪುಗೊಳ್ಳುತ್ತವೆ, ಕೆಲವು ಪದಗಳು ಇತರ ಪದಗಳೊಂದಿಗೆ ಹೇಗೆ ಸಂಬಂಧ ಹೊಂದಿವೆ ಮುಂತಾದವುಗಳ ಬಗ್ಗೆ ವಿಮರ್ಶಾತ್ಮಕವಾಗಿ ಯೋಚಿಸಲು ಸಹಾಯ ಮಾಡುತ್ತವೆ. ಆನಂತರ ಈ ಕಲಿಕೆಯನ್ನು ಅವರು ಆವರೆಗೆ ನೋಡಿರದ ಪದಗಳನ್ನು ಓದಲು ಮತ್ತು ಬರೆಯಲು ವ್ಯಾಪಕವಾಗಿ ಬಳಸಬಹುದು. ಸ್ವಾಭಾವಿಕವಾಗಿ, ಅವರು ಈ ಪ್ರಕ್ರಿಯೆಯಲ್ಲಿ ತಪ್ಪುಗಳನ್ನು ಮಾಡುತ್ತಾರಾದರೂ, ಈ ತಪ್ಪುಗಳು ಯಾದೃಚ್ಛಿಕವಾಗಿರುವುದಿಲ್ಲ; ಲಿಪಿಯನ್ನು ಸರಿಯಾಗಿ ಬಳಸಲು ಮಕ್ಕಳಲ್ಲಿ ಬೆಳೆಯುತ್ತಿರುವ ಸಾಮರ್ಥ್ಯವನ್ನು ಅವು ತೋರಿಸುತ್ತವೆ. ಮುಂದೆ ಈ ಲೇಖನದಲ್ಲಿ ಕೆಲವು ಆಕರ್ಷಕ ಪದ-ರಚಿಸುವಿಕೆ ಮತ್ತು ಪದ-ಬಿಡಿಸುವಿಕೆಯ ಚಟುವಟಿಕೆಗಳನ್ನು ನೀವು ಕಾಣಬಹುದು.

ಓದುವಾಗ ಮತ್ತು ಬರೆಯುವಾಗ ಪದಗಳನ್ನು ಅಧ್ಯಯಿಸಲು ಪ್ರೋತ್ಸಾಹಿಸಿ.

ಲಿಪಿಯ ಬಳಸುವಿಕೆಯನ್ನು ಅಭ್ಯಾಸ ಮಾಡಲು ಪದಗಳನ್ನು ಪ್ರತ್ಯೇಕವಾಗಿ ರಚಿಸುವುದು ಮತ್ತು ಬಿಡಿಸುವುದು ಒಂದು ಪ್ರಮುಖ ಮಾರ್ಗವಾಗಿದೆ. ಈ ಅಭ್ಯಾಸಕ್ಕೆ ಹೆಚ್ಚು ಅರ್ಥಪೂರ್ಣ ಸಂಧರ್ಭವನ್ನು ಒದಗಿಸಲು, ಕಥೆಗಳಲ್ಲಿ ಬರುವ ಪದಗಳನ್ನು ಓದಲು ಮತ್ತು ಯಾವುದೇ ರೀತಿಯ ಸಂವಹನ ನಡೆಸಬೇಕಾದರೆ ಮತ್ತು ಅಭಿವ್ಯಕ್ತಿಗೊಳಿಸಬೇಕಾದರೆ ಅದನ್ನು ಬರವಣಿಗೆಯ ಮೂಲಕ ಮಾಡಲು ನಿಮ್ಮ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿ. ಅವರಿಗೆ

ಕಲಿಸಿರದ ಪದಗಳನ್ನು ಬರೆಯುವಾಗ ವಿದ್ಯಾರ್ಥಿಗಳು ಅರ್ಥಪೂರ್ಣವಾಗಿ ಸಂವಹನ ನಡೆಸಲು ತಮಗೆ ತಿಳಿದಿರುವ ಶಬ್ದಗಳು ಮತ್ತು ಚಿಹ್ನೆಗಳ ಜ್ಞಾನವನ್ನು ಬಳಸುವುದು ಅನಿವಾರ್ಯವಾಗುತ್ತದೆ. ಆರಂಭದಲ್ಲಿ, ಅವರು ಪದಗಳನ್ನು ತಪ್ಪಾಗಿ ಉಚ್ಚರಿಸಬಹುದು; ಆದರೆ, ಅಭ್ಯಾಸದೊಂದಿಗೆ, ಅವರು ಪದ ಬಿಡಿಸಲು ಸಮರ್ಥರಾಗುತ್ತಾರೆ. ಈ ರೀತಿಯ ಅಭ್ಯಾಸದಿಂದ, ನಿಮ್ಮ ವಿದ್ಯಾರ್ಥಿಗಳು ಸುಲಲಿತವಾಗಿ ಮತ್ತು ಪರಿಣಾಮಕಾರಿಯಾಗಿ ಲಿಪಿಯನ್ನು ಬಳಸುತ್ತಾರೆ. ನಂತರದಲ್ಲಿ, ಓದುವಾಗ ಮತ್ತು ಬರೆಯುವಾಗ ಪದಗಳನ್ನು ಗಮನಿಸಲು ಪ್ರೋತ್ಸಾಹಿಸುವ ಕೆಲವು ವಿಧಾನಗಳನ್ನು ನಾವು ತೋರಿಸುತ್ತೇವೆ.

ಲಿಪಿಯನ್ನು ಕಲಿಯಲು ಮತ್ತು ಬಳಸಲು ವಿದ್ಯಾರ್ಥಿಗಳಿಗೆ ಸಹಾಯ ಮಾಡುವ ಚಟುವಟಿಕೆಗಳು.

ಈ ವಿಭಾಗದಲ್ಲಿ, ನಾವು ಈ ಹಿಂದೆ ಹಂಚಿಕೊಂಡ ತತ್ವಗಳ ಆಧಾರದ ಮೇಲೆ ಚಟುವಟಿಕೆಗಳು ಮತ್ತು ಆಟಗಳನ್ನು ವಿನ್ಯಾಸಗೊಳಿಸುವ ವಿಚಾರಗಳನ್ನು ಹಂಚಿಕೊಳ್ಳುತ್ತೇವೆ. ನೀವು ಅವುಗಳನ್ನು ನಿಮ್ಮ ವಿದ್ಯಾರ್ಥಿಗಳ ಅಗತ್ಯತೆಗಳು ಮತ್ತು ನಿಮ್ಮ ಸಂದರ್ಭಕ್ಕೆ ತಕ್ಕಂತೆ ಹೊಂದಿಸಿಕೊಳ್ಳಬಹುದು. ಪ್ರತಿಯೊಂದು ಚಟುವಟಿಕೆಗೂ, ವಿದ್ಯಾರ್ಥಿಗಳು ಏನು ಮಾಡಬೇಕು ಮತ್ತು ಯೋಚಿಸಬೇಕು ಎಂದು ನೀವು ಬಯಸುತ್ತೀರೋ ಅದನ್ನು ಮಾಡಿ ತೋರಿಸಿ.

ಅಕ್ಷರಗಳು ಎಂದರೆ ಸ್ವರಗಳೊಂದಿಗೆ ಜೋಡಿತವಾದ ಮತ್ತು ಜೋಡಿತವಾಗದ ಎರಡೂ ರೀತಿಯ ಅಕ್ಷರಗಳು ಎಂಬರ್ಥದಲ್ಲಿ ಬಳಸುತ್ತಿದ್ದೇವೆ ಎಂಬುದನ್ನು ದಯವಿಟ್ಟು ಗಮನಿಸಿ. ಉದಾಹರಣೆಗೆ, **प, मि, बा, ली**

ಚಿಹ್ನೆ-ಧ್ವನಿ ಸಂಬಂಧಗಳ ಬಗ್ಗೆ ತಿಳಿವಳಿಕೆಯನ್ನು ಮೂಡಿಸುವುದು

ಮಕ್ಕಳಿಗೆ ಅಕ್ಷರಗಳನ್ನು ಗುರುತಿಸಲು ಮತ್ತು ಅವುಗಳನ್ನು ತಮಗೆ ತಿಳಿದಿರುವ ಶಬ್ದಗಳೊಂದಿಗೆ ಹೊಂದಿಸಲು ಸಹಾಯ ಮಾಡುವ ಚಟುವಟಿಕೆಗಳ ಕಡೆ ಗಮನಹರಿಸೋಣ.

- ಆರಂಭದಲ್ಲಿ, ನೀವು ವಿದ್ಯಾರ್ಥಿಗಳನ್ನು ತರಗತಿಯ ಸುತ್ತಲೂ ಓಡಾಡಿ, ಎಷ್ಟು ಸಾಧ್ಯವೋ ಅಷ್ಟು "ಮ" ಶಬ್ದದಿಂದ ಪ್ರಾರಂಭವಾಗುವ ವಸ್ತುಗಳನ್ನು ಸ್ಪರ್ಶಿಸುವಂತೆ ಹೇಳಬಹುದು. ನೀವು ಶಬ್ದಗಳನ್ನು ಬದಲಾಯಿಸುತ್ತಿರಿ. ಕಾಲಾನಂತರದಲ್ಲಿ, ನೀವು ಈ ಶಬ್ದಗಳನ್ನು ಅವುಗಳಿಗೆ ಅನುಗುಣವಾದ ಅಕ್ಷರಗಳೊಂದಿಗೆ ಹೊಂದಿಸಲು ಪ್ರಾರಂಭಿಸಬಹುದು (ಉದಾಹರಣೆಗೆ, **'म'** (ಮ)).

- ಅವರು ಕಲಿಯುತ್ತಿರುವ ಧ್ವನಿ ಅಥವಾ ಅಕ್ಷರದಿಂದ ಆರಂಭವಾಗುವ ಪದಗಳನ್ನು ಸೂಚಿಸುವಂತೆ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿ. ಈ ಸೂಚಿತ ಪದಗಳನ್ನು ಬಳಸಿಕೊಂಡು, ವಿದ್ಯಾರ್ಥಿಗಳನ್ನೂ ಪ್ರಕ್ರಿಯೆಯಲ್ಲಿ ಸೇರಿಸಿಕೊಂಡು, ನೀವು ಪದಗಳ ಮತ್ತು ಚಿತ್ರಗಳ ಕಾರ್ಡ್ಗಳನ್ನು ತಯಾರಿಸಬಹುದು. ಅವುಗಳನ್ನು ತರಗತಿಯಲ್ಲಿ "ಪದ ಗೋಡೆ"ಯಲ್ಲಿ ಪ್ರದರ್ಶಿಸಿ, ಹಾಗೂ ವಿದ್ಯಾರ್ಥಿಗಳ ಓದುವಿಕೆ ಮತ್ತು ಬರವಣಿಗೆಯಲ್ಲಿ ಅಗತ್ಯವಿದ್ದಾಗ ಅವುಗಳನ್ನು ಬಳಸಿ.

- ಅಕ್ಷರಗಳ ಪ್ರಮುಖ ವೈಶಿಷ್ಟ್ಯಗಳ ಬಗ್ಗೆ ವಿದ್ಯಾರ್ಥಿಗಳು ಪರಿಚಿತರಾಗುವಂತೆ ಅವರಿಗೆ ಸಹಾಯ ಮಾಡಲು ಅಕ್ಷರ-ವಿಂಗಡಣೆಗಳನ್ನು ಬಳಸಿ. ಅಕ್ಷರಗಳಿಂದ ಮುದ್ರಿತವಾದ ಅಕ್ಷರಗಳ ಕಟೌಟ್‌ಗಳು ಅಥವಾ ಅಕ್ಷರಗಳ ಕಾರ್ಡ್ಗಳನ್ನು ಅವರಿಗೆ ಕೊಡಿ. ಅವರ ಹೆಸರಿನಲ್ಲಿರುವ ಅಕ್ಷರಗಳು, ಅವರು ಓದುತ್ತಿರುವ ವರ್ಗೀಕರಣದಲ್ಲಿರುವ (ವರ್ಣಸಮೂಹ) ಅಕ್ಷರಗಳು, ಅಥವಾ ಒಂದೇ ಸ್ವರಗಳನ್ನು ಹೊಂದಿರುವ ಕಾರ್ಡ್ಗಳು- ಹೀಗೆ ವಿವಿಧ ಗುಣಲಕ್ಷಣಗಳ ಪ್ರಕಾರ ಅವುಗಳನ್ನು ಪ್ರತ್ಯೇಕವಾಗಿ ವಿವರಿಸುವಂತೆ ಅವರಿಗೆ ಹೇಳಿ. ಕಾರ್ಡ್ಗಳನ್ನು ವಿಂಗಡಿಸುತ್ತಾ ವಿದ್ಯಾರ್ಥಿಗಳು ಪರಸ್ಪರ ಹೊಂದುವ ಶಬ್ದಗಳನ್ನು ಹೇಳುತ್ತಾರೆ ಮತ್ತು ಆ ಮೂಲಕ ಒಂದು ಚಿಹ್ನೆಯನ್ನು ಅದರ ಶಬ್ದದೊಂದಿಗೆ ಜೋಡಿಸುವ ಅಭ್ಯಾಸ ಮಾಡುತ್ತಾರೆ.

- ನೀವು ವಿದ್ಯಾರ್ಥಿಗಳ ಹೆಸರಿನ ಫಲಕಗಳನ್ನು ಮಾಡಿ ಅವುಗಳನ್ನು ವಿಭಿನ್ನ ರೀತಿಯಲ್ಲಿ ಬಳಸಬಹುದು: ಅವರ ಹೆಸರಿನ ಲಿಖಿತ ರೂಪಗಳನ್ನು ಗುರುತಿಸಲು; ನಿರ್ದಿಷ್ಟ ವೈಶಿಷ್ಟ್ಯಗಳ ಹೆಸರುಗಳನ್ನು ಹುಡುಕಲು (ಉದಾಹರಣೆ. ನಿರ್ದಿಷ್ಟ ಶಬ್ದಗಳೊಂದಿಗೆ ಪ್ರಾರಂಭ ಅಥವಾ ಅಂತ್ಯವಾಗುವ ಹೆಸರುಗಳು); ಫಲಕಗಳನ್ನು ಬಳಸಿ ಅವರ ಅಥವಾ ಅವರ ಸ್ನೇಹಿತರ ಹೆಸರುಗಳನ್ನು ಬರೆಯಲು; ಅಥವಾ ಅಕ್ಷರಗಳ ಕಟೌಟ್‌ಗಳೊಂದಿಗೆ ಹೆಸರುಗಳನ್ನು ಇತ್ಯಾದಿಗಳನ್ನು ಮಾಡಲು ಅವರಿಗೆ ಹೇಳಿ. ಚಿತ್ರ. ೧ ಓರ್ವ ವಿದ್ಯಾರ್ಥಿಯು ಹೆಸರು ಕಾರ್ಡ್ನಲ್ಲಿರುವ ಹೆಸರನ್ನು ಫಲಕದಲ್ಲಿ ಹುಡುಕುತ್ತಿರುವುದನ್ನು ತೋರಿಸುತ್ತದೆ.

ಚಿತ್ರ ೧. ಹೆಸರುಗಳ ಫಲಕದಲ್ಲಿರುವ ಹೆಸರಿನೊಂದಿಗೆ ಹೆಸರು ಕಾರ್ಡ್ನಲ್ಲಿರುವ ಹೆಸರನ್ನು ಹೊಂದಿಸುತ್ತಿರುವ ಮಗು. (ಒಇಎಲ್‌ಪಿ)

ಚಿತ್ರ. ೩. ಒಇಎಲ್‌ಪಿ, ಅಜ್ಮೇರ್‌ನಲ್ಲಿ ಆರಂಭಿಕ ಶಬ್ದಗಳ ಮೂಲಕ ವಸ್ತುಗಳ ವಿಂಗಡಣೆ.

- ಚಿತ್ರಗಳು, ಲೇಬಲ್‌ಗಳು ಮತ್ತು ಆವಿಷ್ಕರಿಸಿದ ಕಾಗುಣಿತಗಳನ್ನು ಬಳಸಿ ಕಥೆಗಳನ್ನು ಬರೆಯುವಂತೆ ಯುವ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿ. ಅವರ ಬರಹ ಅಥವಾ ಚಿತ್ರಗಳನ್ನು ನಿಮ್ಮ ತರಗತಿಯಲ್ಲಿ ಪ್ರದರ್ಶಿಸಿ. ತಮ್ಮದೇ ಆದ ಪದಗಳನ್ನು ಬರೆಯಲು ಪ್ರಯತ್ನಿಸುವುದು ("ಕಲಿಸಿದ" ಪದಗಳನ್ನು ನಕಲು ಮಾಡುವ ಬದಲು) ಅವರು ಕಲಿಯುತ್ತಿರುವ ಅಕ್ಷರಗಳ ಶಬ್ದಗಳನ್ನು ಗ್ರಹಿಸಲು ಸಹಾಯ ಮಾಡುತ್ತದೆ. ಅವರು ಕಲಿಯುತ್ತಿರುವಾಗ, ಬಹಳ ಸಮಯದವರೆಗೆ ತಪ್ಪಾದ ಕಾಗುಣಿತವನ್ನು ಬರೆಯುತ್ತಾರೆ ಎಂಬುದನ್ನು ದಯವಿಟ್ಟು ಗಮನದಲ್ಲಿಡಿ. ಈ ಸಮಯದಲ್ಲಿ ನಿಮ್ಮ ಕೆಲಸ ಅವರ ಕಾಗುಣಿತವನ್ನು ಸರಿಪಡಿಸುವುದಲ್ಲ. ಮಗುವು ತಿಳಿಸಲು ಯತ್ನಿಸುತ್ತಿರುವ ಅರ್ಥಕ್ಕೆ ಪ್ರತಿಕ್ರಿಯಿಸುವ ಮೂಲಕ ಬರೆಯುವಂತೆ ಪ್ರೇರೇಪಿಸುವುದನ್ನು

ಮುಂದುವರೆಸಿ. ಮಗುವು ನಿರಂತರವಾಗಿ ಮಾಡುವ ಕಾಗುಣಿತ ದೋಷಗಳ ಮಾದರಿಯನ್ನು ನೀವು ಗಮನಿಸಬಹುದು ಮತ್ತು ನಂತರದ ಹಂತದಲ್ಲಿ, ನೀವು ಈ ಒಂದು ಅಥವಾ ಎರಡು ಮಾದರಿ ದೋಷಗಳನ್ನು ತೆಗೆದುಕೊಂಡು, ಅದರ ಮೇಲೆ ಸಣ್ಣ-ಗುಂಪು ಪಾಠಗಳನ್ನು ಮಾಡಬಹುದು. ಉದಾಹರಣೆಗೆ, ಒಂದು ಮಗು ಬರೆಯುವಾಗ, ನಿರಂತರವಾಗಿ ಕಾಗುಣಿತಗಳನ್ನು ಬಿಡುತ್ತಿದ್ದರೆ, ನೀವು ಆ ಮಗುವನ್ನು ಅದೇ ರೀತಿಯ ತಪ್ಪುಗಳನ್ನು ಮಾಡಿರುವ ವಿದ್ಯಾರ್ಥಿಗಳೊಂದಿಗೆ ಗುಂಪು ಮಾಡಬಹುದು.

• ಅಕ್ಷರ ಕಲಿಕೆಯನ್ನು ವಿಮರ್ಶಿಸಲು ಅಥವಾ ವಿದ್ಯಾರ್ಥಿಗಳಿಗೆ ಒಂದೇ ರೀತಿಯ ಅಕ್ಷರಗಳ ನಡುವೆ ವ್ಯತ್ಯಾಸಗಳನ್ನು ತೋರಿಸಲು ಸಹಾಯ ಮಾಡಲು (ಉದಾಹರಣೆಗೆ ಕನ್ನಡದಲ್ಲಿನ ಠ [/th/] ಮತ್ತುರ [/r/]), ನೀವು ವಸ್ತು ವಿಂಗಡಣೆಗಳನ್ನು ಬಳಸಬಹುದು. ನೀವು ಪರಿಶೀಲಿಸಲು ಬಯಸುವ ಅಕ್ಷರಗಳ ವಿವಿಧ ವಿಭಾಗಗಳನ್ನು ನೆಲದ ಮೇಲೆ ಲೇಬಲ್ ಮಾಡಿ. ಈ ಶಬ್ದಗಳಿಂದ ಪ್ರಾರಂಭವಾಗುವ ದೈನಂದಿನ ವಸ್ತುಗಳು ಅಥವಾ ಆಟಿಕೆಗಳ ಗುಂಪನ್ನು ನಿಮ್ಮ ವಿದ್ಯಾರ್ಥಿಗಳಿಗೆ ನೀಡಿ. ಚಿತ್ರ ೩ರಲ್ಲಿ ನೀವು ನೋಡುವಂತೆ, ವಿದ್ಯಾರ್ಥಿಗಳು ವಸ್ತುಗಳನ್ನು ನೆಲದ ಮೇಲಿನ ವೃತ್ತಗಳಲ್ಲಿ ವಿಂಗಡಿಸಬೇಕು. ಅವರು ನಿರ್ದಿಷ್ಟ ವೃತ್ತವನ್ನು ಏಕೆ ಆರಿಸಿಕೊಂಡರು ಎಂದು ನೀವು ಅವರನ್ನು ಕೇಳಬಹುದು. ಅಕ್ಷರಗಳ ನಡುವೆ ವ್ಯತ್ಯಾಸವಿದೆ ಎಂದು ಸರಳವಾಗಿ ಹೇಳುವುದಕ್ಕಿಂತ ಅವರು ಸ್ವತಃ ತಮ್ಮನ್ನು ತಾವೇ ಅನ್ವೇಷಿಸಿಕೊಳ್ಳುವ ಅವಕಾಶ ನೀಡುವುದು ಹೆಚ್ಚು ಪರಿಣಾಮಕಾರಿ.

ಪದಗಳನ್ನು ರಚಿಸಲು ಮತ್ತು ಬಿಡಿಸಲು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿ.

ಈ ಚಟುವಟಿಕೆಗಳು ಮಕ್ಕಳು ಪದಗಳೊಂದಿಗೆ ಕೆಲಸ ಮಾಡುವಾಗ ಸಕ್ರಿಯವಾಗಿ ಯೋಚಿಸಲು ಸಹಾಯ ಮಾಡುತ್ತದೆ.

• ಪದ ರಚನೆ. ವಿದ್ಯಾರ್ಥಿಗಳನ್ನು ಗುಂಪುಗಳಾಗಿ ವಿಂಗಡಿಸಿ ಮತ್ತು ಪ್ರತಿ ಗುಂಪಿಗೆ ಹತ್ತು ಅಕ್ಷರಗಳನ್ನು ನೀಡಿ. (ಸ್ವರಗಳನ್ನು ಅಕ್ಷರಗಳ ಜೊತೆಗೆ ಜೋಡಿಸಲಾಗಿದೆ, ಉದಾಹರಣೆಗೆ: **मि, बा, ली (ಮಿ, ಬಾ, ಲೀ)**). ಅವರಿಗೆ ಎಷ್ಟು ಸಾಧ್ಯವೋ ಅಷ್ಟು ಅರ್ಥಪೂರ್ಣ ಪದಗಳನ್ನು ಮಾಡಲು ಹೇಳಿ. ನೀವು ಅವರಿಗೆ ಕೆಲವು ಅಕ್ಷರ ಕಾರ್ಡ್ಗಳನ್ನೂ ಸಹ ಕೊಡಬಹುದು ಮತ್ತು ಒಂದು ನಿರ್ದಿಷ್ಟ ವರ್ಗದ ಪದಗಳನ್ನು ಮಾಡಲು ಹೇಳಬಹುದು. ಉದಾಹರಣೆಗೆ, ಕುಟುಂಬ ಸಂಬಂಧಗಳ ಹೆಸರುಗಳು (ಮಾಮಾ, ಅಜ್ಜಿ); ಅವರ ಸುತ್ತಲೂ ಅವರು ನೋಡುವ ವಸ್ತುಗಳ ಪದಗಳು; ಎರಡು, ಮೂರು ಅಥವಾ ನಾಲ್ಕು ಅಕ್ಷರದ ಪದಗಳು; ಮತ್ತು ವ್ಯಂಜನ ಅಥವಾ ಸ್ವರದಿಂದ ಪ್ರಾರಂಭವಾಗುವ ಪದಗಳು ಇತ್ಯಾದಿ. ನೀವು ಅನೇಕ ವರ್ಗಗಳನ್ನು ಹೊಂದಿರಬಹುದು, ವಿದ್ಯಾರ್ಥಿಗಳು ಹೆಚ್ಚಿನ ಅಕ್ಷರಗಳನ್ನು ಕಲಿಯುತ್ತಿದ್ದಂತೆ ಅವುಗಳನ್ನು ವಿಸ್ತರಿಸುತ್ತಾ ಹೋಗಿ. ಮಕ್ಕಳು ಈ ಚಟುವಟಿಕೆಯನ್ನು ಆನಂದಿಸುತ್ತಾರೆ ಮತ್ತು ಆ ಮೂಲಕ ವಾಕ್ಯಗಳನ್ನು ರಚಿಸಲೂ ಸಹ ಪ್ರಾರಂಭಿಸಬಹುದು! ಚಿತ್ರ ೪ ಅಜ್ಮೇರ್‌ನ ಓಇಎಲ್‌ಪಿ ಯಲ್ಲಿ ಪದ ರಚಿಸುವ ಚಟುವಟಿಕೆಯ ಒಂದು ನೋಟವನ್ನು ತೋರಿಸುತ್ತದೆ.

ನಂತರ, ಅವರು ಈ ಪದಗಳನ್ನು ತಮ್ಮ ನೋಟ್ ಪುಸ್ತಕಗಳಲ್ಲಿ ಬರೆದು ಅವುಗಳಿಗೆ ಚಿತ್ರಗಳನ್ನು ರಚಿಸಬಹುದು. ನೀವು ಈ ಪದಗಳ ಪಟ್ಟಿಗಳನ್ನು ತರಗತಿಯಲ್ಲಿ ಪ್ರದರ್ಶಿಸಬಹುದು ಅಥವಾ ಈ ಪದಗಳ ಕಾರ್ಡ್ಗಳನ್ನು "ಪದ ಗೋಡೆ"ಗೆ ಸೇರಿಸಬಹುದು. ಕೆಲವೊಮ್ಮೆ ಮೋಜಿಗಾಗಿ, ನೀವು ವಿದ್ಯಾರ್ಥಿಗಳನ್ನು ತರಗತಿಯ ಸುತ್ತಲೂ ಓಡಲು ಹೇಳಿ ನೀವು ಓದಿದ ಪದಗಳನ್ನು ಸ್ಪರ್ಶಿಸಲು ಕೇಳಬಹುದು. ನೀವು ಈ ಮುದ್ರಣಗಳನ್ನು ಇತರ ವಿಧಾನಗಳಲ್ಲಿ ಸಹ ಬಳಸಬಹುದು (ಉದಾಹರಣೆಗೆ, ಬರೆಯುವ ಸಮಯದಲ್ಲಿ ಕಾಗುಣಿತದ ಉಲ್ಲೇಖಗಳಾಗಿ).

ಲಿಪಿಯೊಂದಿಗೆ ಮೌಖಿಕ ಭಾಷೆಯ ಕೊಂಡಿಯನ್ನು ಬೆಸೆಯಲು ಈ ಚಟುವಟಿಕೆಯು ಉತ್ತಮ ಮಾರ್ಗವಾಗಿದೆ. ಏಕೆಂದರೆ ಮಕ್ಕಳು ತಮ್ಮ ಮೌಖಿಕ ಭಾಷೆಯೊಂದಿಗೆ ಪರಿಚಿತವಾಗಿರುವ ಅರ್ಥಪೂರ್ಣ ಪದಗಳನ್ನು ಮಾಡುತ್ತಾರೆ.

ಚಿತ್ರ ೫ ಪದ ಏಣಿ (ರಸಿನ್ಸ್ಕಿ, ೨೦೦೫)

ಚಿತ್ರ ೬ ಚಕ್ ಮಕ್ ನಿಯತಕಾಲಿಕೆಯ ಚಿತ್ರ ಪಹೇಲಿ

ವಾಸ್ತವವಾಗಿ, ನಾವು ಮೊದಲೇ ಹೇಳಿದಂತೆ, ಓಇಎಲ್‌ಪಿ ಯಂತಹ ಸಂಸ್ಥೆಗಳು ತಮ್ಮ ಆರಂಭಿಕ ಅಕ್ಷರ-ಸ್ವರ ಗುಂಪುಗಳನ್ನು ಎಚ್ಚರಿಕೆಯಿಂದ, ಅಂದರೆ, ವಿದ್ಯಾರ್ಥಿಗಳು ಆರಂಭದಿಂದಲೇ ತಮ್ಮ ಮನೆಯ ಭಾಷೆಗಳಲ್ಲಿ ಸಾಮಾನ್ಯವಾಗಿ ಬಳಸುವ ಪದಗಳನ್ನು ರಚಿಸಲು ಅನುವಾಗುವಂತೆ ಆರಿಸಿಕೊಳ್ಳಬಹುದು.

• ಪದ ಒಗಟುಗಳು-ಪದ ಏಣಿ ಮತ್ತು ಪದಬಂಧಗಳು. ಚಿತ್ರ ೫ ಒಂದು ಪದ-ಏಣಿಯನ್ನು ತೋರಿಸುತ್ತದೆ. ಇಲ್ಲಿ, ನಾವು ಒಂದು ಪದದಿಂದ ಪ್ರಾರಂಭಿಸುತ್ತೇವೆ (ಈ ಉದಾಹರಣೆಯಲ್ಲಿ 'ಟ್ರಿಕ್'). ನಂತರ, ಪ್ರತಿ ಹಂತದಲ್ಲೂ, ಮುಂದಿನ ಪದದ ಕಾಗುಣಿತ ಮತ್ತು ಅರ್ಥದ ಬಗ್ಗೆ ನಾವು ವಿದ್ಯಾರ್ಥಿಗಳಿಗೆ ಸುಳಿವುಗಳನ್ನು ನೀಡುತ್ತಾ ಹೋಗುತ್ತೇವೆ. ಅದರಂತೆ, ಅವರು ಸರಿಯಾದ ಉತ್ತರವನ್ನು ಪಡೆಯಲು ಕೊಟ್ಟಿರುವ ಪದದ ಅಕ್ಷರಗಳನ್ನು ಸೇರಿಸುತ್ತಾ, ತೆಗೆದುಹಾಕುತ್ತಾ ಅಥವಾ ಮರುಹೊಂದಿಸುತ್ತಾ ಹೋಗುತ್ತಾರೆ (ಉದಾಹರಣೆಗೆ 'ಒಂದು ರೈಲು ಇದರ ಮೇಲೆ ಸಾಗುತ್ತದೆ; ಟ್ರಾಕ್ ಪದದಲ್ಲಿನ ಸ್ವರವನ್ನು ಬದಲಾಯಿಸಿ' ಎಂಬ ಸುಳಿವಿಗೆ ಪ್ರತಿಕ್ರಿಯೆಯಾಗಿ 'ಟ್ರಿಕ್'). ಮಕ್ಕಳು ಈ ಸುಳಿವುಗಳನ್ನು ಬಿಡಿಸಲು ಇಷ್ಟಪಡುತ್ತಾರೆ! ತಮಗೆ ಅರಿವಿಲ್ಲದೇ, ಅವರು ಸರಿಯಾದ ಉತ್ತರವನ್ನು ಪಡೆಯಲು ಶಬ್ದ-ಚಿಹ್ನೆ ಸಂಬಂಧಗಳ ಬಗ್ಗೆ ಮತ್ತು ಪದದ ಅರ್ಥಗಳ ಬಗ್ಗೆ ಯೋಚಿಸುತ್ತಿರುತ್ತಾರೆ. ಪದಬಂಧಗಳು ಮತ್ತು ಚಿತ್ರದ ಕ್ರಾಸ್‌ವರ್ಡ್ಗಳು (ಚಿತ್ರ ೬ರಲ್ಲಿ ತೋರಿಸಲಾಗಿದೆ) ಸಹ ಅದೇ ರೀತಿ ಕಾರ್ಯನಿರ್ವಹಿಸುತ್ತವೆ. ತಮ್ಮ ಸಹಪಾಠಿಗಳೊಂದಿಗೆ ಹಂಚಿಕೊಳ್ಳಲು ವಿದ್ಯಾರ್ಥಿಗಳು ಸ್ವತಃ ಪದ ಏಣಿಗಳು ಮತ್ತು ಕ್ರಾಸ್‌ವರ್ಡ್ಗಳನ್ನು ರಚಿಸಲು ಪ್ರೋತ್ಸಾಹಿಸಬಹುದು.

- ಪದ ಅಂತಾಕ್ಷರಿ. ನಿಮ್ಮ ವಿದ್ಯಾರ್ಥಿಗಳಿಗೆ ಅವರು ಈಗ ಓದುತ್ತಿರುವ ಮತ್ತು ಈ ಹಿಂದೆ ಓದಿರುವ ಎಲ್ಲಾ ಅಕ್ಷರ ಕಾರ್ಡ್ಗಳನ್ನು ನೀಡಿ. ಒಂದು ಮಗು ಕಾರ್ಡ್ಗಳೊಂದಿಗೆ ಪದವನ್ನು ನಿರ್ಮಿಸುತ್ತದೆ. ಮುಂದಿನ ಮಗು ಮೊದಲ ಮಗು ರಚಿಸಿದ ಪದವು ಅಂತ್ಯಗೊಳ್ಳುವ ಅಕ್ಷರದೊಂದಿಗೆ ಪ್ರಾರಂಭವಾಗುವ ಪದವನ್ನು ಮುಂದಿನ ಪದವಾಗಿ ಕಟ್ಟುತ್ತದೆ, ಮತ್ತು ಇದು ಹೀಗೆ ಮುಂದುವರೆಯಬೇಕು. ಪದಗಳನ್ನು ಮೌಖಿಕವಾಗಿ ಪತ್ತೆ ಮಾಡುವುದರ ಜೊತೆಗೆ ಕಾರ್ಡ್ಗಳೊಂದಿಗೆ ಪದಗಳನ್ನು ಉಚ್ಚರಿಸಲು ಮಕ್ಕಳನ್ನು ಕೇಳಿದಾಗ, ಅದು ಅವರಲ್ಲಿ ಬಲವಾದ ಶಬ್ದ-ಚಿಹ್ನೆ ಸಂಬಂಧಗಳನ್ನು ನಿರ್ಮಿಸಲು ಸಹಾಯ ಮಾಡುತ್ತದೆ.

- ಪದ-ವಿಂಗಡಣೆಗಳು. ಪದ ವಿಂಗಡಣೆಯಲ್ಲಿ, ವಿದ್ಯಾರ್ಥಿಗಳು ನಿರ್ದಿಷ್ಟ ವೈಶಿಷ್ಟ್ಯಗಳಿಗೆ ಅನುಗುಣವಾಗಿ ಪದ ಕಾರ್ಡ್ಗಳನ್ನು ಹೋಲಿಕೆ ಮಾಡುತ್ತಾರೆ ಮತ್ತು ವಿಂಗಡಿಸುತ್ತಾರೆ. ಮಾದರಿಗಳನ್ನು ಪರಿಚಯಿಸಲು ಮತ್ತು ಪರಿಕಲ್ಪನೆಯ ಕಲಿಕೆಯನ್ನು ಕ್ರೋಢೀಕರಿಸಲು ಅಥವಾ ವಿಮರ್ಶಿಸಲು ವಿದ್ಯಾರ್ಥಿಗಳಿಗೆ ಸಹಾಯ ಮಾಡಲು ನೀವು ಈ ಚಟುವಟಿಕೆಯನ್ನು ಬಳಸಬಹುದು.

ಪದಗಳನ್ನು ಹೇಗೆ ವಿಂಗಡಿಸಬೇಕು ಎಂಬುದನ್ನು ನೀವು ಒಮ್ಮೆ ತಪ್ಪದೇ ತೋರಿಸಿ. ವಿಶೇಷವಾಗಿ, ಮೊದಲ ಬಾರಿಗೆ ವೈಶಿಷ್ಟ್ಯವನ್ನು "ಅನ್ವೇಷಿಸಲು" ನೀವು ಮಕ್ಕಳಿಗೆ ಸಹಾಯ ಮಾಡುತ್ತಿದ್ದರೆ, ಅದು ಮುಖ್ಯವಾಗುತ್ತದೆ. ಉದಾಹರಣೆಗೆ, ನೀವು ಇಂಗ್ಲಿಷ್‌ನಲ್ಲಿ ವಿದ್ಯಾರ್ಥಿಗಳನ್ನು ಹ್ರಸ್ವ ಮತ್ತು ದೀರ್ಘ-ಇ ಶಬ್ದಕ್ಕೆ ಪರಿಚಯಿಸಲು ಪ್ರಯತ್ನಿಸುತ್ತಿದ್ದೀರಿ ಎಂದು ಕಲ್ಪಿಸಿಕೊಳ್ಳಿ. ಪದಗಳನ್ನು ಓದುತ್ತಾ (ಹ್ರಸ್ವ್ಕ ಮತ್ತು ದೀರ್ಘ-ಇ **(ಈ)** ಶಬ್ದಗಳೊಂದಿಗೆ) ಯಾದೃಚ್ಛಿಕವಾಗಿ ಕಾರ್ಡ್ಗಳನ್ನು ವಿದ್ಯಾರ್ಥಿಗಳ ಮುಂದೆ ಇರಿಸುವ ಮೂಲಕ ನೀವು ಇದನ್ನು ಪ್ರಾರಂಭಿಸಬಹುದು. ನಂತರ ಅವರು ಪದಗಳಲ್ಲಿ ಏನಾದರೂ ಗಮನಿಸಿದರೆ ಎಂದು ಕೇಳಿ. ಚಿತ್ರ ೭ರಲ್ಲಿ ತೋರಿಸಿರುವಂತೆ, ನೀವು ಅವರಿಗೆ ಪ್ರಮುಖ ವರ್ಗದ ಕಾರ್ಡ್ಗಳನ್ನು ಚಿತ್ರಗಳೊಂದಿಗೆ ತೋರಿಸಬಹುದು (ನಮ್ಮ ಉದಾಹರಣೆಯಲ್ಲಿ, ಹ್ರಸ್ವ-ಇ ಶಬ್ದಕ್ಕಾಗಿ "web" ಮತ್ತು ದೀರ್ಘ-ಇ ಶಬ್ದಕ್ಕಾಗಿ "queen") ಮತ್ತು ಅವರಿಗೆ ಸುಳಿವುಗಳನ್ನು ನೀಡಿ ("ಅವುಗಳೆಲ್ಲವೂ ಮಧ್ಯದಲ್ಲಿ ಒಂದೇ ಶಬ್ದವನ್ನು ಹೊಂದಿವೆಯೇ?"). ಅವರು ವ್ಯತ್ಯಾಸವನ್ನು ಅರ್ಥಮಾಡಿಕೊಂಡ ನಂತರ, ಮಧ್ಯದ ಶಬ್ದವನ್ನು ಅವಲಂಬಿಸಿ ಎರಡು ಚಿತ್ರ ಕಾರ್ಡ್ಗಳ ಅಡಿಯಲ್ಲಿ ಪದಗಳನ್ನು ಇರಿಸಿ ಗುಂಪನ್ನು ವಿಂಗಡಿಸಿ. ವಿಂಗಡಣೆ ಮುಂದುವರೆದಂತೆ, ವಿದ್ಯಾರ್ಥಿಗಳು ಎತ್ತಿ ತೋರಿಸುವ ಯಾವುದಾದರೂ ವೈಶಿಷ್ಟ್ಯಗಳನ್ನು ಚರ್ಚಿಸಿ. (ಉದಾಹರಣೆಗೆ "ವೆಬ್‌ನ ಅಡಿಯಲ್ಲಿರುವ ಪದಗಳೆಲ್ಲವೂ ಒಂದೇ ಇ ಅನ್ನು ಹೊಂದಿವೆ"). ಇತರ ಗುಂಪುಗಳಿಗೆ ಹೊಂದಿಕೆ ಆಗದ ಪದಗಳ ಗುಂಪನ್ನು ಸಹ ನೀವು ರಚಿಸಬಹುದು (ಉದಾಹರಣೆಗೆ **"been"**). ಕೊನೆಯಲ್ಲಿ, ಪ್ರತಿ ವರ್ಗಕ್ಕೆ ಒಂದು ಮುಖ್ಯ ಪದ ಮಾತ್ರ ಉಳಿದಿರುವ ಹಾಗೆ ಎಲ್ಲಾ ಕಾರ್ಡ್ಗಳನ್ನು ತೆಗೆದುಹಾಕಿ. ವಿದ್ಯಾರ್ಥಿಗಳನ್ನು ಸ್ವತಃ ವಿಂಗಡಣೆ ಮಾಡುವಂತೆ ಪ್ರೋತ್ಸಾಹಿಸಿ. ನಂತರದ ಸುತ್ತುಗಳಲ್ಲಿ ಕಾರ್ಡ್ಗಳನ್ನು **"ee"** ಅಥವಾ **"ea"** ಕಾಗುಣಿತ ಮಾದರಿಗಳೊಂದಿಗೆ ಬೇರ್ಪಡಿಸುವ ಮೂಲಕ ನೀವು ದೀರ್ಘ-ಇ ಗುಂಪನ್ನು ಮತ್ತಷ್ಟು ಪರಿಷ್ಕರಿಸಬಹುದು.

ಚಿತ್ರ ೭. ಹ್ರಸ್ವ-ಇ ಮತ್ತು ದೀರ್ಘ-ಇ ಮಾದರಿಗಳಿಗೆ ಪದ ವಿಂಗಡಣೆ (ಬೇರ್ ಮತ್ತು ಇತರರು, ೨೦೦೪).

ಪದಗಳ ವಿಂಗಡಣೆಗಳು ವಿದ್ಯಾರ್ಥಿಗಳಿಗೆ ತಮ್ಮ ಕಲಿಕೆಯನ್ನು ವಿಮರ್ಶಿಸಲು ಅಥವಾ ಕ್ರೋಢೀಕರಿಸಲು ಸಹ ಸಹಾಯ ಮಾಡುತ್ತವೆ. ಉದಾಹರಣೆಗೆ ಹಿಂದಿಯಲ್ಲಿ **"aa"** ಮತ್ತು **"ee"** ಸ್ವರಗಳ ಕಲಿಕೆಯನ್ನು ಕ್ರೋಢೀಕರಿಸಲು ನೀವು ಬಯಸಿದರೆ, ಈ ಸ್ವರಗಳೊಂದಿಗೆ ಕೊನೆಗೊಳ್ಳುವ ಪದಗಳ ಒಂದು ಗುಂಪಿನ ಕಾರ್ಡ್ಗಳನ್ನು ನೀವು ಅವರಿಗೆ ನೀಡಬಹುದು (ಉದಾಹರಣೆಗೆ, "ಚಿಚಿ" ಸ್ವರಕ್ಕೆ **मामा, काला, गला, पीना** ಮತ್ತು **"ee"** ಸ್ವರಕ್ಕೆ **नानी, कापी, पानी, कली**). ಈ ಪದಗಳೊಂದಿಗೆ ಒಂದು ವಿಂಗಡಣೆಯನ್ನು ಪ್ರದರ್ಶಿಸಿದ ನಂತರ, ಪದಗಳ ನಡುವೆ ವ್ಯತ್ಯಾಸವನ್ನು ತೋರಿಸಲು ನೀವು "ಚಿಚಿ" ಅಥವಾ **"ee"** ಅಂತಿಮ ಸ್ವರದ ಮೇಲೆ ಹೇಗೆ ಗಮನ ಹರಿಸುತ್ತಿದ್ದೀರಿ ಎಂಬುದನ್ನು ವಿದ್ಯಾರ್ಥಿಗಳಿಗೆ ತೋರಿಸಿದ ನಂತರ, ವಿದ್ಯಾರ್ಥಿಗಳೇ ಸ್ವತಃ ವಿಂಗಡಣೆ ಮಾಡಲು ಪ್ರಯತ್ನಿಸುವಂತೆ ಅವರಿಗೆ ಹೇಳಬಹುದು. ವಿದ್ಯಾರ್ಥಿಗಳು ತಮ್ಮ ನೋಟ್ ಪುಸ್ತಕಗಳಲ್ಲಿ ಅಥವಾ ತರಗತಿಗಳಲ್ಲಿ ಪ್ರದರ್ಶಿಸಲಾದ ಸಂವಾದಾತ್ಮಕ ಫಲಕಗಳಲ್ಲಿ ಈ ವಿಂಗಡಣೆಗಳನ್ನು ಬರೆಯಬಹುದು. ನಂತರದಲ್ಲಿ ಹೆಚ್ಚಿನ ಪದಗಳನ್ನು ಅವುಗಳಿಗೆ ಸೇರಿಸಬಹುದು.

ಅನೇಕ ಪದ ವಿಂಗಡಣೆಯ ವರ್ಗಗಳು ಇರಬಹುದು. ಉದಾಹರಣೆಗೆ, ನಿರ್ದಿಷ್ಟ ವ್ಯಂಜನಗಳು ಅಥವಾ ವ್ಯಂಜನ ಸಮೂಹಗಳೊಂದಿಗೆ ಪ್ರಾರಂಭವಾಗುವ/ ಕೊನೆಗೊಳ್ಳುವ ಪದಗಳು, ಪ್ರಾಸಬದ್ಧ ಪದಗಳು, ಸಮಾನ/ ವಿರುದ್ಧಾರ್ಥ ಪದಗಳು, ಜನರನ್ನು ಹೆಸರಿಸುವ ಅಥವಾ ವಿಷಯಗಳನ್ನು ವಿವರಿಸುವ ಪದಗಳು, ಏಕವಚನ/ ಬಹುವಚನ, ಬಹುವಚನಗಳನ್ನು ರಚಿಸುವ ವಿಭಿನ್ನ ವಿಧಾನಗಳು, ಒಂದೇ ಮೂಲದ ಅಥವಾ ಪದ-ಭಾಗಗಳನ್ನು ಹೊಂದಿರುವ ಪದಗಳು, ಇತ್ಯಾದಿ. (ಬೇರ್ ಮತ್ತು ಇತರರು, ೨೦೦೪; ಪಿನ್ನೆಲ್ ಮತ್ತು ಫೌಂಟಾಸ್, ೧೯೯೮). ಇಲ್ಲಿ ಮುಖ್ಯವಾದುದು ಏನೆಂದರೆ, ಮಕ್ಕಳು ವಿಂಗಡಣೆ ಮಾಡುತ್ತಿದ್ದಂತೆ ಆ ಪದಗಳ ಬಗ್ಗೆ ಮಾತನಾಡುತ್ತಾರೆ, ಮತ್ತು ಇದು ಅವರು ವಿಂಗಡಣೆ ಮಾಡಲು ಬಳಸುತ್ತಿರುವ ಸಾಮಾನ್ಯ ತತ್ವದ ತಿಳಿವಳಿಕೆಯನ್ನು ಉತ್ತೇಜಿಸುತ್ತದೆ.

ಓದುವಾಗ ಮತ್ತು ಬರೆಯುವಾಗ ಪದ ಬಿಡಿಸುವಿಕೆಯನ್ನು ಪ್ರೋತ್ಸಾಹಿಸಿ

ಮಕ್ಕಳು ತಮ್ಮ ಜೀವನ ಮತ್ತು ಅನುಭವಗಳೊಂದಿಗೆ ಸಂಪರ್ಕ ಹೊಂದಿದ ಯಾವುದನ್ನಾದರೂ ಓದುವಾಗ ಮತ್ತು ಬರೆಯುವಾಗ ಅವರು ಹೇಗೆ ತೊಡಗಿಸಿಕೊಂಡಿದ್ದಾರೆ ಎಂಬುದನ್ನು ನೀವು ಗಮನಿಸಿದ್ದೀರಾ? ಇವು ಅಕ್ಷರಗಳು, ಶಬ್ದಗಳು ಮತ್ತು ಪದಗಳ ಬಗ್ಗೆ ಮಕ್ಕಳು ತಿಳಿದುಕೊಂಡಿರುವುದನ್ನು ಅಭ್ಯಾಸ ಮಾಡುವ ಅರ್ಥಪೂರ್ಣ ಅವಕಾಶಗಳು. ಆದರೆ ಮಕ್ಕಳು ಅದನ್ನು ಸ್ವಯಂಪ್ರೇರಿತವಾಗಿ ಮಾಡಲು ಸಾಧ್ಯವಾಗದಿರಬಹುದು. ಯಾವ ಮಾಹಿತಿ

ಮತ್ತು ಸೂಚನೆಗಳನ್ನು ಬಳಸಬೇಕು ಮತ್ತು ಹೇಗೆ ಎಂದು ವಿದ್ಯಾರ್ಥಿಗಳಿಗೆ ತೋರಿಸಿ. ಈ ವಿಭಾಗದಲ್ಲಿ ನಾವು ತರಗತಿಯಲ್ಲಿ ಅಧಿಕೃತ ಓದುವಿಕೆ ಮತ್ತು ಬರೆಯುವ ಅವಕಾಶಗಳನ್ನು ರಚಿಸುವ ಕೆಲವು ವಿಧಾನಗಳನ್ನು ವಿವರಿಸುತ್ತೇವೆ. ಅದರಲ್ಲಿ ಪದ ಬಿಡಿಸುವುದು ಒಂದು ಪ್ರಮುಖ ಭಾಗವಾಗುತ್ತದೆ.

• ಹಂಚಿಕೊಂಡು ಓದುವುದು. ಇದು ಆರಂಭದ ಓದುಗರನ್ನು ಓದುವ ಪ್ರಕ್ರಿಯೆಯಲ್ಲಿ ಭಾಗವಹಿಸಲು ಆಹ್ವಾನಿಸಲು ಉತ್ತಮ ಮಾರ್ಗವಾಗಿದೆ. ಪುನರಾವರ್ತಿತ ಅಥವಾ ಊಹಿಸಬಹುದಾದ ವಾಕ್ಯ ಮಾದರಿಗಳನ್ನು ಹೊಂದಿರುವ ಮತ್ತು ದೊಡ್ಡ ಅಕ್ಷರಗಳಲ್ಲಿರುವ ಪಠ್ಯಗಳನ್ನು ಹಂಚಿಕೊಳ್ಳಲು ಪ್ರಯತ್ನಿಸಿ. ಈ ಪಠ್ಯವನ್ನು ಒಂದೆರಡು ಬಾರಿ ನೀವು ಗಟ್ಟಿಯಾಗಿ ಓದಿದ ನಂತರ ನಿಮ್ಮೊಂದಿಗೆ ಓದಲು ವಿದ್ಯಾರ್ಥಿಗಳನ್ನು ಆಹ್ವಾನಿಸಿ (ಮತ್ತು ನೀವು ಓದಿದ ನಂತರ ಅಲ್ಲ). ಓದುವಾಗ ಆಗಾಗ ನಿಲ್ಲಿಸಿ, ಮುದ್ರಣ ಮತ್ತು ಪದಗಳ ನಿರ್ದಿಷ್ಟ ವೈಶಿಷ್ಟ್ಯಗಳನ್ನು ಅವರಿಗೆ ತೋರಿಸಿ ಮತ್ತು ಅವರು ಎಷ್ಟರ ಮಟ್ಟಿಗೆ ಅರ್ಥಮಾಡಿಕೊಳ್ಳಬಲ್ಲರು ಎಂಬ ಆಧಾರದ ಮೇಲೆ ಪಠ್ಯದಲ್ಲಿ ಬರುವ ಕೆಲವು ಪದಗಳನ್ನು ಹೇಗೆ ಬಿಡಿಸಬಹುದು ಎಂದು ತೋರಿಸಿ. ಉದಾಹರಣೆಗೆ, ಪ್ರಾಸಬದ್ಧ ಪದಗಳನ್ನು ಅಥವಾ ನಿರ್ದಿಷ್ಟ ಅಕ್ಷರ ಅಥವಾ ಸ್ವರದಿಂದ ಪ್ರಾರಂಭವಾಗುವ ಪದಗಳನ್ನು ಆರಿಸಿಕೊಳ್ಳಲು ನೀವು ಅವರನ್ನು ಕೇಳಬಹುದು. ನಿಮ್ಮ ತರಗತಿಯಲ್ಲಿ ಹಂಚಿಕೆಯ ಓದುವಿಕೆಗಾಗಿ ದೊಡ್ಡ ಪುಸ್ತಕಗಳು ಲಭ್ಯವಿಲ್ಲದಿದ್ದರೆ ಚಿಂತಿಸಬೇಡಿ. ನೀವು ಯಾವುದಾದರೂ ಪೋಸ್ಟರ್ ಕಾಗದದಲ್ಲಿ ಪ್ರಾಸಗಳನ್ನು ಬರೆಯಬಹುದು; ಅಥವಾ, ಹಂಚಿಕೆಯ ಬರವಣಿಗೆಯ ಸಮಯದಲ್ಲಿ (ನಂತರದ ವಿಭಾಗದಲ್ಲಿ ವಿವರಿಸಲಾಗಿದೆ) ಈ ಉದ್ದೇಶಕ್ಕಾಗಿ ನೀವು ವಿದ್ಯಾರ್ಥಿಗಳೊಂದಿಗೆ ಒಟ್ಟಾಗಿ ರಚಿಸುವ ಪಠ್ಯಗಳನ್ನೂ ಸಹ ಬಳಸಬಹುದು.

• ಮಾರ್ಗದರ್ಶಿತ ಓದುವಿಕೆ. ಈ ಚಟುವಟಿಕೆಯು ವಿದ್ಯಾರ್ಥಿಗಳಿಗೆ ನಿರರ್ಗಳವಾಗಿ ಓದುವ ಕಾರ್ಯತಂತ್ರಗಳನ್ನು ಸುಧಾರಿಸಲು ಸಹಾಯ ಮಾಡುತ್ತದೆ. ನಿಮ್ಮ ತರಗತಿಯನ್ನು ಅವರ ಓದುವ ಸಾಮರ್ಥ್ಯಕ್ಕೆ ಅನುಗುಣವಾಗಿ ಮೂರರಿಂದ ನಾಲ್ಕು ಗುಂಪುಗಳಾಗಿ ವಿಂಗಡಿಸುವ ಮೂಲಕ ಪ್ರಾರಂಭಿಸಿ ಮತ್ತು ಅವರು ಓದುವ ಮಟ್ಟಕ್ಕೆ ಸರಿಹೊಂದುವ ವಾಕ್ಯವೃಂದಗಳು/ಪುಸ್ತಕಗಳನ್ನು ನೀಡಿ. ಪ್ರತಿ ಗುಂಪಿನ ಪಠ್ಯದಲ್ಲಿ ಏನಿದೆ, ಅದರಿಂದ ಅವರು ಏನು ನಿರೀಕ್ಷಿಸಬಹುದು ಎಂಬುದನ್ನು ವಿದ್ಯಾರ್ಥಿಗಳಿಗೆ ತಿಳಿಸಿ ಪಠ್ಯವನ್ನು ಅವರಿಗೆ ಪರಿಚಯಿಸಿ. ಪಠ್ಯದಲ್ಲಿರುವ, ವಿದ್ಯಾರ್ಥಿಗಳಿಗೆ ಹೊಸದಾಗಿರುವ ಅಥವಾ ಓದಲು ಕಷ್ಟವಾಗುವ ಎರಡು ಮೂರು ಪದಗಳನ್ನು ಪರಿಚಯಿಸಿ. ನಂತರ ವಿದ್ಯಾರ್ಥಿಗಳು ಸ್ವತಃ ಅವರೇ ಪಠ್ಯವನ್ನು ಓದಬಹುದು. ಪ್ರತಿ ಮಗುವನ್ನು ಕೆಲವು ನಿಮಿಷಗಳ ಕಾಲ ಗಮನಿಸಿ ಮತ್ತು ಅವರು ಓದುವಾಗ ಯಾವ ಪದವನ್ನು ಓದಲು ಕಷ್ಟಪಡುತ್ತಿರುತ್ತಾರೋ ಅದನ್ನು ಹೇಗೆ ಓದುವುದು ಎಂದು ಸನ್ನೆ ಮಾಡಿ ಅಥವಾ ಪ್ರದರ್ಶಿಸಿ ತೋರಿಸಿ. ಇಡೀ ಗುಂಪಿಗೆ ಸಹಾಯವಾಗುವಂತಹ ಪದ–ಬಿಡಿಸುವ ಅಂಶವಿದ್ದರೆ, ಅದನ್ನು ಓದಿದ ನಂತರ ಚರ್ಚೆಗೆ ತೆಗೆದುಕೊಳ್ಳಿ. ಈ ಚರ್ಚೆಯಲ್ಲಿ ವಿದ್ಯಾರ್ಥಿಗಳು ಓದುವುದರಿಂದ ಏನು ಅರ್ಥಮಾಡಿಕೊಂಡರು ಎಂಬುದರ ಬಗ್ಗೆಯೂ ಗಮನಹರಿಸಿ. ಈ ರೀತಿಯಾಗಿ ವಾಕ್ಯವೃಂದಗಳು ಮತ್ತು ಪುಸ್ತಕಗಳನ್ನು ಓದುವ ಸಂದರ್ಭದಲ್ಲಿ ಪದಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ಕಲಿಸಲು ಮಾರ್ಗದರ್ಶಿ ಓದುವಿಕೆಯು ಓದುವ ಮೊದಲು, ಓದುವಾಗ ಮತ್ತು ಓದಿದ ನಂತರ ಅನೇಕ ಅವಕಾಶಗಳನ್ನು ಒದಗಿಸುತ್ತದೆ.

• ಸಂವಾದಾತ್ಮಕ/ ಹಂಚಿಕೆಯ ಬರವಣಿಗೆ. ತುಂಬಾ ಚಿಕ್ಕ ಮಕ್ಕಳಿಗೂ ಮೊದಲಿನಿಂದಲೂ ಬರೆಯಲು ನಿಯಮಿತ ಅವಕಾಶಗಳನ್ನು ಒದಗಿಸಿ. ಅವರು ಏನು ಯೋಚಿಸುತ್ತಿದ್ದಾರೆ ಮತ್ತು ಭಾವಿಸುತ್ತಿದ್ದಾರೆಂದು ತೋರಿಸಲು ಲಿಖಿತ ಚಿಹ್ನೆಗಳನ್ನು ಬಳಸಲು ಅವರು ಇಂತಹ ಸಂದರ್ಭಗಳಲ್ಲೇ ಪ್ರಯತ್ನಿಸುವುದು. ಚಿಕ್ಕ ಮಕ್ಕಳ ವಿಷಯದಲ್ಲಿ ಇದು ಕೇವಲ ಗೀಚುವಿಕೆ, ಚಿತ್ರ ಬಿಡಿಸುವಿಕೆ ಮತ್ತು ಲೇಬಲಿಂಗ್ ಮಾಡುವಿಕೆ ಆಗಿರಬಹುದು.

ಸಂವಾದಾತ್ಮಕ/ ಹಂಚಿಕೆಯ ಬರವಣಿಗೆಯಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಸಂದೇಶ ಅಥವಾ ಪಠ್ಯವನ್ನು ಫಲಕದಲ್ಲಿ ಅಥವಾ ಕಪ್ಪು ಹಲಗೆಯ ಮೇಲೆ ಒಟ್ಟಿಗೆ ರಚಿಸುತ್ತಾರೆ. ವಿದ್ಯಾರ್ಥಿಗಳ ಗುಂಪು ಆಲೋಚನೆಗಳನ್ನು ಒಟ್ಟಿಗೆ ರಚಿಸಬಹುದು, ಮತ್ತು ಅದನ್ನು ಶಿಕ್ಷಕರು ಬರೆಯುವ ಪ್ರಾಥಮಿಕ ಜವಾಬ್ದಾರಿಯನ್ನು ತೆಗೆದುಕೊಳ್ಳಬಹುದು. ಅವು, ತರಗತಿಯ ನಿಯಮಗಳನ್ನು ಪಟ್ಟಿ ಮಾಡುವುದು, ಒಂದು ಮಗುವಿನ ಕಥೆ ಬರೆಯುವುದು, ಪತ್ರ ಅಥವಾ ಪಾಕವಿಧಾನವನ್ನು ಬರೆಯುವುದು, ತರಗತಿಯ ಪ್ರವಾಸದ ಅವಲೋಕನಗಳನ್ನು ದಾಖಲಿಸುವುದು ಇತ್ಯಾದಿ ಆಗಿರಬಹುದು. ಗುಂಪಿನ ವಯಸ್ಸು ಮತ್ತು ಅಗತ್ಯಗಳಿಗೆ ಅನುಗುಣವಾಗಿ, ಅವರೇ ಮುಂದೆ ಬಂದು ಅಕ್ಷರ, ಪದ ಅಥವಾ ಲೇಖನ ಚಿಹ್ನೆಯನ್ನು ಸೇರಿಸಲು ವಿದ್ಯಾರ್ಥಿಗಳನ್ನು ಆಹ್ವಾನಿಸಿ. ಇದನ್ನೇ ಮುಂದೆ ಹಂಚಿಕೆಯ ಓದುವಿಕೆ ಮಾಡುವ ಸಮಯದಲ್ಲಿ ಬಳಸಲು "ಅರ್ಥಪೂರ್ಣ ಮುದ್ರಣ"ವಾಗಿ ಉಳಿಸಿಕೊಳ್ಳಿ.

• ಮಾರ್ಗದರ್ಶಿತ ಬರವಣಿಗೆ/ಬರವಣಿಗೆ ಕಾರ್ಯಾಗಾರ. ಹಂಚಿಕೆಯ ಬರವಣಿಗೆಯ ಜೊತೆಗೆ, ಚಿಕ್ಕ ಮಕ್ಕಳಿಗೆ ಶಿಕ್ಷಕರ ಮಾರ್ಗದರ್ಶನದೊಂದಿಗೆ ಪ್ರತ್ಯೇಕವಾಗಿ ಬರೆಯಲೂ ಸಹ ಸಮಯ ಬೇಕಾಗುತ್ತದೆ. ಸಂವಹನ ಮತ್ತು ಅಭಿವ್ಯಕ್ತಿಗಾಗಿ ಬರೆಯಲು ಅಥವಾ ವಿವಿಧ ರೀತಿಯ ಬರವಣಿಗೆಯ ಬಗ್ಗೆ ಕಲಿಯಲು ಇಲ್ಲಿ ಒತ್ತು ನೀಡಲಾಗುತ್ತದೆ (ಉದಾಹರಣೆಗೆ, ವಾಸ್ತವಿಕತೆಯ ವಿರುದ್ಧ ಕಾಲ್ಪನಿಕ/ಫ್ಯಾಂಟಸಿ ಕಥೆ, ಅಥವಾ ಕವನ ಅಥವಾ ಪತ್ರ ಬರವಣಿಗೆ). ಬರವಣಿಗೆಯ ಅಭ್ಯಾಸವನ್ನು ಪ್ರಾರಂಭ ಮಾಡುವ ಮೊದಲು ಏನು ಬರೆಯಬೇಕೆಂದಿದ್ದೀರೋ ಅದರ ಒಂದು ನಿರ್ದಿಷ್ಟ ಅಂಶ ಅಥವಾ ಉದ್ದೇಶವನ್ನು ಚರ್ಚಿಸುವ ಮೂಲಕ ನೀವು ಮಾರ್ಗದರ್ಶಿತ ಬರವಣಿಗೆಯ ಸಮಯವನ್ನು ಪ್ರಾರಂಭಿಸಬಹುದು (ಉದಾಹರಣೆಗೆ, ವಿದ್ಯಾರ್ಥಿಗಳು ಬರೆಯಲಿ ಎಂದು ನೀವು ಬಯಸುವ ಮತ್ತು ಅವರೊಂದಿಗೆ ಚರ್ಚಿಸಲು ಬಯಸುವ ಕವಿತೆಯ ಉದಾಹರಣೆಯನ್ನು ನೀಡಿ). ನಂತರ ವಿದ್ಯಾರ್ಥಿಗಳು ಈ ವಿಚಾರಗಳ ಮೇಲೆ ವೈಯಕ್ತಿಕವಾಗಿ ಬರವಣಿಗೆ ಮಾಡಬಹುದು. ನೀವು ತರಗತಿಯೊಳಗೆ ಅವರ ಸುತ್ತಲೂ ಅಡ್ಡಾಡುತ್ತಾ ಅವರು ಮಾಡುತ್ತಿರುವ ಬರವಣಿಗೆಯನ್ನು ಅವರೊಂದಿಗೆ ಚರ್ಚಿಸಬಹುದು, ಅವರ ಸಾಮರ್ಥ್ಯವನ್ನು ಗುರುತಿಸಬಹುದು ಮತ್ತು ಅವರಿಗೆ ಸಹಾಯವಾಗುವಂತೆ ಕೆಲವು ನಿರ್ದಿಷ್ಟ ಆಲೋಚನೆಗಳನ್ನು ಅವರಿಗೆ ನೀಡಬಹುದು. ಕೊನೆಯಲ್ಲಿ, ಗುಂಪಿನಲ್ಲಿ ಕೆಲವು ಅಭಿಪ್ರಾಯಗಳನ್ನು ಹಂಚಿಕೊಂಡು ತರಗತಿಯ ಸಮಯವನ್ನು ಮುಗಿಸಿ. ಕಾಗುಣಿತವು ಈ ಪಾಠಗಳ ಕೇಂದ್ರಬಿಂದುವಾಗಿರದಿದ್ದರೂ ಸಹ, ವಿದ್ಯಾರ್ಥಿಗಳಿಗೆ ಪದೇಪದೇ ಅಭ್ಯಾಸ ಮಾಡಲು ಅರ್ಥಪೂರ್ಣ ಅವಕಾಶಗಳನ್ನು

ನೀಡಿದಾಗ ಓದುವ ಮತ್ತು ಬರೆಯುವ ಕ್ರಿಯೆಯಲ್ಲಿ ಉತ್ತಮಗೊಳ್ಳುತ್ತಾರೆ. ಜೊತೆಗೆ, ವಿದ್ಯಾರ್ಥಿಗಳು ತಮ್ಮ 'ಅಂತಿಮ' ಆವೃತ್ತಿಗಳನ್ನು ಇತರರೊಂದಿಗೆ ಹಂಚಿಕೊಳ್ಳಲು ತಯಾರಾಗುವ ಮೊದಲು ಪದೇಪದೇ ಬರೆದು, ತಿದ್ದಿ ಬರೆಯಲು ಪ್ರೋತ್ಸಾಹಿಸಬಹುದು ಮತ್ತು ಕೊನೆಯಲ್ಲಿ ಕರಡು ತಿದ್ದುವ ಮತ್ತು ಕಾಗುಣಿತದತ್ತ ಗಮನ ಹರಿಸಬಹುದು. ಇಲ್ಲಿ ಇತರರೆಂದರೆ ಅವರ ಸಹಪಾಠಿಗಳು ಅಥವಾ ಇನ್ನೊಂದು ತರಗತಿಯ ವಿದ್ಯಾರ್ಥಿಗಳು ಅಥವಾ ಪೋಷಕರೂ ಆಗಿರಬಹುದು. ಅಂತಿಮವಾಗಿ, ಕರಡು ತಿದ್ದಿದ/ಪ್ರೂಫ್-ರೀಡಿಂಗ್ ಆವೃತ್ತಿಗಳು ತರಗತಿಯ ಗೋಡೆಗಳ ಮೇಲೆ ಅಥವಾ ಶಿಕ್ಷಕರಿಂದ ರಚಿಸಲ್ಪಟ್ಟ 'ತರಗತಿಯ ಪುಸ್ತಕ'ಕ್ಕೆ ಸೇರಬಹುದು. ಅವರ ಬರವಣಿಗೆಗಳನ್ನು ಇತರರೊಂದಿಗೆ ಹಂಚಿಕೊಳ್ಳುವ ಪ್ರೇರಣೆಯು, ಇತರ ಅಂಶಗಳ ಮೇಲೆ ಗಮನ ನೀಡುತ್ತಿದ್ದರೂ ವಿದ್ಯಾರ್ಥಿಗಳು ತಮ್ಮ ಬರವಣಿಗೆಯಲ್ಲಿನ ಕಾಗುಣಿತಗಳನ್ನು ಗಮನಿಸಲು ಸಹಾಯ ಮಾಡುತ್ತದೆ.

ಉಪಸಂಹಾರ

ಈ ಕೈಪಿಡಿಯಾದ್ಯಂತ, ಲಿಪಿಯನ್ನು ಕಲಿಯುವುದು ಬೇಸರದ ಅಥವಾ ನೀರಸ ಸಂಗತಿ ಅಲ್ಲ ಎಂದು ನಿಮಗೆ ತೋರಿಸಿಕೊಟ್ಟಿದ್ದೇವೆ ಎಂದು ಭಾವಿಸುತ್ತೇವೆ! ಹೌದು, ನಾವು ಲಿಪಿಯನ್ನು ವ್ಯವಸ್ಥಿತವಾಗಿ ಮತ್ತು ಸ್ಪಷ್ಟವಾಗಿ ಕಲಿಸಬೇಕಾಗಿದೆ. ಅದಕ್ಕಾಗಿ ನಾವು ತೊಡಗಿಸಿಕೊಳ್ಳಬಹುದಾದ ಮತ್ತು ಅರ್ಥಪೂರ್ಣವಾದ ಚಟುವಟಿಕೆಗಳನ್ನು ಬಳಸಬಹುದು! ಪದಗಳನ್ನು ಗಮನಿಸಲೇ ಪ್ರತ್ಯೇಕವಾಗಿ, (ಅಂದರೆ, ವಿಭಾಗಗಳು ೧ ಮತ್ತು ೨ ರ ಅಡಿಯಲ್ಲಿ ವಿವರಿಸಲಾದ ಚಟುವಟಿಕೆಗಳು) ಪ್ರತಿನಿತ್ಯ ನಿಮ್ಮ ಭಾಷಾ ತರಗತಿಯಲ್ಲಿ ೨೦ ರಿಂದ ೩೦ ನಿಮಿಷಗಳಿಗಿಂತ ಹೆಚ್ಚು ಸಮಯ ತೆಗೆದುಕೊಳ್ಳಬಾರದು. ಅರ್ಥಪೂರ್ಣ ಪದಗಳು ಮತ್ತು ವಾಕ್ಯಗಳನ್ನು ಓದಲು ಮತ್ತು ಬರೆಯಲು ಪ್ರಾರಂಭಿಸುವ ಮೊದಲೇ ಮಕ್ಕಳು ಎಲ್ಲಾ ಅಕ್ಷರಗಳನ್ನೂ, ಕಾಗುಣಿತಗಳನ್ನೂ ಕಲಿಯುವ ಅಗತ್ಯವಿಲ್ಲ ಎಂದು ನಿಮಗೆ ಮನವರಿಕೆ ಮಾಡಿಕೊಟ್ಟಿದ್ದೇವೆ ಎಂದು ಭಾವಿಸುತ್ತೇವೆ. ಆದ್ದರಿಂದ ಮೊದಲಿನಿಂದಲೂ ಪದ-ಬಿಡಿಸುವಿಕೆಯನ್ನು ಒಂದು ಪ್ರಮುಖ ಭಾಗವಾಗಿಸಿಕೊಂಡು, ನಿಮ್ಮ ವಿದ್ಯಾರ್ಥಿಗಳನ್ನು ಅಧಿಕೃತ ಓದುವಿಕೆ ಮತ್ತು ಬರೆಯುವ ಚಟುವಟಿಕೆಗಳೊಂದಿಗೆ ತೊಡಗಿಸಿಕೊಳ್ಳಲು ಪ್ರಯತ್ನಿಸಿ. ಒಟ್ಟಾರೆಯಾಗಿ, ಭಾಷಾ ಕಾರ್ಯಕ್ರಮದ ಇತರ ಗುರಿಗಳೊಂದಿಗೆ ಪದ ಅಧ್ಯಯನವನ್ನು ಸಮತೋಲನಗೊಳಿಸಲು ಪ್ರಯತ್ನಿಸಿ- ಅಂದರೆ, ಖುಷಿಗಾಗಿ ಓದುವುದು, ಅಭಿವ್ಯಕ್ತಿಗಾಗಿ ಬರೆಯುವುದು, ಗ್ರಹಿಕೆಗಾಗಿ ಓದುವುದು ಮುಂತಾದವು. ಮಕ್ಕಳು ಲಿಖಿತ ಭಾಷೆಯ ಈ ವಿಭಿನ್ನ ಅಂಶಗಳೊಂದಿಗೆ ತೊಡಗಿಸಿಕೊಳ್ಳುವುದರಿಂದ ಅವರು ಶೀಘ್ರದಲ್ಲೇ ಸ್ವತಂತ್ರವಾಗಿ ಮತ್ತು ಪರಿಣಾಮಕಾರಿಯಾಗಿ ಓದುವ ಮತ್ತು ಬರೆಯುವ ಹಾದಿಯಲ್ಲಿರುತ್ತಾರೆ.

***

ಪರಾಮರ್ಶನೆಗಳು


**Bear, D. R., Invernizzi, M., Templeton, S., & Johnston, F. (2004). Words their way: Word study for phonics, vocabulary, and spelling instruction. Upper Saddle River, N.J: Pearson-Merrill Prentice Hall.**

**Jayaram, K. (2018, August 27). OELP's approach to building script knowledge in beginning readers and writers [Blog post]. Retrieved from: http://eli.tiss.edu/oelps-approach-to-building-script-knowledge-in-beginning-readers-and-writers/**

**Pinnell, G.S., & Fountas, I.C. (1998). Word matters: Teaching Phonics and Spelling in the Reading/Writing Classroom. Portsmouth, NH: Heinemann.**

**Subramaniam, S., Menon, S., & Sajitha S. (2017). LiRIL teacher's guide – Teaching and learning the script. Azim Premji University. Retrieved from: http://eli.tiss.edu/?page_id=3344**

ಲೇಖಕರು: ಅಖಿಲಾ ಪೈಥಾ

ಪರಿಕಲ್ಪನೆ ಮತ್ತು ಸಂಪಾದನೆ: ಶೈಲಜಾ ಮೆನನ್

ಕರಡು ತಿದ್ದುವಿಕೆ: ಚೇತನಾ ದಿವ್ಯ ವಾಸುದೇವ್

ರೂಪರೇಷೆ ಮತ್ತು ವಿನ್ಯಾಸ: ಹರ್ಷಿತಾ ವಿ. ದಾಸ್